|| ಓಂ ||

ಶ್ರೀ ಸದ್ಗುರು ಸಮರ್ಥ

# ನಿತ್ಯ ನೇಮಾವಲಿ

ಅನುವಾದಕರು :

ಇಂದಿರಾಬಾಯಿ ದೇಶಪಾಂಡೆ

ಶ್ರೀ ಗುರುದೇವ ರಾನಡೆ ಸಮಾಧಿ ಟ್ರಸ್ಟ್

ನಿಂಬಾಳ (ಆರ್.ಎಸ್.) ಪಿನ್ ೫೮೬೨೧೧

೨೦೧೪

॥ ಓಂ ॥

ಶ್ರೀ ಸದ್ಗುರು ಸಮರ್ಥ

# ನಿತ್ಯ ನೇಮಾವಲಿ

(ಕನ್ನಡ ಭಾವಾರ್ಥಸಹಿತ)

ಅನುವಾದಕರು :

ಇಂದಿರಾಬಾಯಿ ದೇಶಪಾಂಡೆ

ಶ್ರೀ ಗುರುದೇವ ರಾನಡೆ ಸಮಾಧಿ ಟ್ರಸ್ಟ್

ನಿಂಬಾಳ (ಆರ್.ಎಸ್.) ಪಿನ್ ೫೮೬೨೧೧

೨೦೧೪

ಪ್ರಕಾಶಕರು : ಶ್ರೀ ಗುರುದೇವ ರಾನಡೆ ಸಮಾಧಿ ಟ್ರಸ್ಟ್,
ನಿಂಬಾಳ (ಆರ್.ಎಸ್.) ಪಿನ್ ೫೮೬೨೧೧
ಜಿಲ್ಲಾ ವಿಜಾಪುರ (ಕರ್ನಾಟಕ)

ಪ್ರಥಮ ಆವೃತ್ತಿ: ೨೦೦೧
ಎರಡನೇ ಆವೃತ್ತಿ =೨೦೧೪



ಬೆಲೆ : ೩೦.೦೦ ರೂ.

ಛಾಯಾಕ್ಷರ ಜೋಡಣೆ ಮತ್ತು ಮುದ್ರಣ
ತನುಷ ಗ್ರಾಫಿಕ್ಸ್
ಶ್ರೀ ಶಾಹು ಮಾರ್ಕೆಟ್ ಯಾರ್ಡ್,
ಹನುಮಾನ ಹೊಟೇಲಿನ ಹತ್ತಿರ, ಕೊಲ್ಹಾಪುರ.
ಪಿನ್ : ೪೧೬೦೦೫. ಮೊ.೯೯೨೨೪೩೦೬೮೪

# ಎರಡನೇಯ ಆವೃತ್ತಿಯ ನಿವೇದನೆ

ನಿತ್ಯನಿಯಮಾವಳಿ ಪ್ರಕಾಶನೆಗೆ ಈಗಾಗಲೇ ೧೦೩ ವರ್ಷಗಳಾದವು. ಕನ್ನಡ ಭಾಷೆಯಲ್ಲಿ ಇದು ಎರಡನೇಯ ಆವೃತ್ತಿ. ನಿತ್ಯನಿಯಮಾವಳಿ ಎಂದರೆ ಶ್ರೀ ಭಾವುಸಾಹೇಬ ಮಹಾರಾಜರ ಆಜ್ಞೆಯಂತೆ ಶ್ರೀ ಗುರುದೇವ ರಾನಡೆ ಮಹಾರಾಜರು ರಚಿಸಿದ "ಭಜನಾಮೃತ".

"ಭಜನಾಮೃತವನ್ನು ನಿತ್ಯವೂ ತಪ್ಪದೇ ಪಠಿಸಿದರೆ ಪರಮಾರ್ಥ ಸಾಧನೆಯಾಗುತ್ತದೆ. ನಿತ್ಯನಿಯಮಾವಳಿಯ ಮೊದಲನೇಯ ಮರಾಠಿ ಆವೃತ್ತಿ ೧೯೧೧ ರಲ್ಲಿ ಪ್ರಕಾಶಿತವಾಗಿತ್ತು. ಇದರಲ್ಲಿರುವ ಎಲ್ಲ ಭಜನೆಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡು ನಿತ್ಯ ಪಠಿಸಬೇಕು. ಹಾಗಾದರೊಂದೆ ನಮ್ಮ ಭಕ್ತಿ ಭಾವನೆ ಬೆಳೆದು ಬಲವತ್ತರವಾಗುತ್ತದೆ.

ಇದರಲ್ಲಿರುವ ಎಲ್ಲ ಭಜನೆಗಳಿಗೂ ಸ್ವತಃ ಭಾವುಸಾಹೇಬರೇ 'ಸ್ವರ-ಸಂಯೋಜನೆ' ಮಾಡಿದ್ದಾರೆ. ಕನ್ನಡ ಸಾಧಕರಿಗಾಗಿ ಈ ಆವೃತ್ತಿಯನ್ನು ಬಿಡುಗಡೆ ಮಾಡುವಾಗ ನಮಗೆ ತುಂಬಾ ಸಂತೋಷವಾಗುತ್ತದೆ.

ಧನ್ಯವಾದಗಳು.

ನಿಂಬಾಳ ಆರ್.ಎಸ್.ಶ್ರೀ ಗುರುದೇವ ರಾನಡೆ
ಸಮಾಧಿ ಟ್ರಸ್ಟ

# ಹೃದ್ಗತ

ದಿವಂಗತ ಪಿ.ಎಚ್. ಕುಲಕರ್ಣಿಯವರನ್ನು ಮೊದಲ ಬಾರಿಗೆ ನಾನು ಭೆಟ್ಟಿಯಾದಾಗ ನನಗೆ ಅವರು "ನಿತ್ಯನೇಮಾವಲಿ"ಯನ್ನು ಕನ್ನಡದಲ್ಲಿ ಅನುವಾದಿಸಲು ಸೂಚಿಸಿದರು. ಮರಾಠೀಭಾಷೆ ಗೊತ್ತಿದ್ದರೂ, ನನಗೆ ಅರ್ಥವಾಗದ ಅಭಂಗಗಳ, ಭಜನೆಗಳ ವಿವರಣೆಯನ್ನು ಅವರಿಂದ ತಿಳಿದುಕೊಳ್ಳುತ್ತಿದ್ದೆ. ನಾನು ಬರೆದ ಪ್ರತಿಯೊಂದು ಶಬ್ದವನ್ನು ಅವರು ಪರಿಶೀಲಿಸಿ, ಹಸ್ತಪ್ರತಿಯ ಮುಕ್ಕಾಲು ಭಾಗವನ್ನು ತಿದ್ದಿಕೊಟ್ಟರು. ಅವರು ಕೊಟ್ಟ ಸ್ಫೂರ್ತಿಯಿಂದಲೇ ಈ ಕೆಲಸ ಸಾಧ್ಯವಾಯಿತು. ದುರ್ದೈವದಿಂದ ಅವರು ನಮ್ಮನ್ನು ಅಕಸ್ಮಾತ್ತಾಗಿ ಅಗಲಿದ್ದರಿಂದ ಅನುವಾದದ ಕೆಲಸ ಹಾಗೆಯೇ ಉಳಿಯಿತು. ಉದ್ದಿಷ್ಟಕಾರ್ಯ ಪೂರ್ತಿಯಾಗಲಿಲ್ಲವೆಂದು ಕೈಚೆಲ್ಲಿ ಕುಳಿತಿದ್ದೆ. ಅಷ್ಟರಲ್ಲಿ ಸುದೈವದಿಂದ ಶ್ರೀ ಪ್ರಲ್ಹಾದರಾಯರ ಧರ್ಮಪತ್ನಿ ಶ್ರೀಮತಿ ಲಲಿತಕ್ಕನವರು ಹಸ್ತಲಿಖಿತವನ್ನು ತೆಗೆದುಕೊಂಡು, ಅದನ್ನು ಪ್ರೊಫೆಸರ ಬಿ.ಆರ್. ಕುಲಕರ್ಣಿ ಅವರಿಗೆ ತೋರಿಸಿ, ಮುಕ್ತಾಯದ ಹಂತಕ್ಕೆ ಬರುವಂತೆ ಸಲಹೆಸೂಚನೆಗಳನ್ನು ಪಡೆದುಕೊಂಡು ಬಂದರು. ಉಳಿದ ಕಾಲುಭಾಗ ಹಸ್ತಪ್ರತಿಯನ್ನು ತಿದ್ದಿ, ಅರ್ಥವಾಗದ ಭಾಗಗಳ ಭಾವಾರ್ಥ ಬರೆದು ಕೆಲಸ

ಮುಂದುವರಿಸಲು ಪ್ರೊಫೆಸರ ಕುಲಕರ್ಣಿಯವರು ಸೂಚಿಸಿದರು. ಅವರ ಸಹಕಾರಕ್ಕಾಗಿ ಅವರಿಗೆ ನಾನು ತುಂಬಾ ಕೃತಜ್ಞಳಾಗಿದ್ದೇನೆ.

ಶ್ರೀ ಗುರುದೇವ ರಾನಡೆ ಸಮಾಧಿ ಟ್ರಸ್ಟ್, ನಿಂಬಾಳ ಆರ್.ಎಸ್. ಈ ಸಂಸ್ಥೆಯವರು ಹೊರತಂದ ನಿತ್ಯನೇಮಾವಲಿಯ ೧೯೯೪ನೆಯ ಆವೃತ್ತಿಯನ್ನು ಅನುಸರಿಸಿ ಭಾಷಾಂತರ ಮಾಡಿದ್ದೇನೆ.

ಪ್ರಸ್ತುತ ಪುಸ್ತಕದಲ್ಲಿದ್ದ ಮರಾಠೀ ಭಜನೆಯ ಅವತರಣವನ್ನು ಕನ್ನಡಲಿಪಿಯಲ್ಲಿ ಮೊದಲುಕೊಟ್ಟು, ಅದರ ಕೆಳಗೆ ಕನ್ನಡದ ಭಾವಾರ್ಥ ಬರೆದಿದ್ದೇನೆ.

ಅಧ್ಯಾತ್ಮದಲ್ಲಿ ನನಗೆ ಆಸಕ್ತಿಯಿದ್ದರೂ ಮೊದಲಬಾರಿಗೆ ಇಂಥ ಭಜನೆಗಳನ್ನು ಕನ್ನಡಿಸಿದ್ದರಿಂದ ಲೋಪದೋಷಗಳು ಇರಬಹುದು. ಅದಕ್ಕಾಗಿ ಓದುಗರ ಕ್ಷಮೆ ಕೇಳಿಕೊಳ್ಳುತ್ತೇನೆ. ಈ ನಿತ್ಯನೇಮಾವಲಿ ಪುಸ್ತಕದ ಪ್ರಕಾಶಕರಾದ ಶ್ರೀ ಗುರುದೇವ ರಾನಡೆ ಸಮಾಧಿ ಟ್ರಸ್ಟ, ನಿಂಬಾಳ ಆರ್.ಎಸ್. ಇವರಿಗೆ ನಾನು ತುಂಬಾಋಣಿಯಾಗಿದ್ದೇನೆ. ಈ ಕೆಲಸದಲ್ಲಿ ನನಗೆ ಸಹಾಯಮಾಡಿದ ಶ್ರೀ ಬಿ.ಆರ್. ಕುಲಕರ್ಣಿ ಹಾಗೂ ಶ್ರೀಮತಿ ಲಲಿತಕ್ಕನವರಿಗೂ, ಹಸ್ತಪ್ರತಿಯನ್ನು ಸಿದ್ಧಪಡಿಸುವಲ್ಲಿ ನೆರವಾದ ನನ್ನ ಮಗಳು ಶ್ರೀಮತಿ ಗೀತಾ ಕುಲಕರ್ಣಿ ಇವಳಿಗೂ ನನ್ನ ಕೃತಜ್ಞತೆಗಳು.

ಬೆಂಗಳೂರು ಇಂದಿರಾಬಾಯಿ. ಕೇ. ದೇಶಪಾಂಡೆ

೨೬-೧-೨೦೦೧

# ಅನುಕ್ರಮಣಿಕೆ

# ನಿತ್ಯನೇಃಮಾವಲಿ

# ಪ್ರಥಮ ಆವೃತ್ತಿಯ ಪ್ರಸ್ತಾವನೆ
## (೧೯೧೧)

ಈ ಪುಸ್ತಕದಲ್ಲಿ ಶ್ರೀ ಭಾವೂರಾವಮಹಾರಾಜ ಉಮದೀಕರ ಇವರ ಸಂಪ್ರದಾಯದಲ್ಲಿ ಪ್ರಚಲಿತವಿರುವ ಭಜನೆಯ ಕ್ರಮವನ್ನು ಕೊಡಲಾಗಿದೆ. ಅದರಲ್ಲಿ ಮೊದಲು ರಾತ್ರಿಯ ಭಜನೆ, ಆನಂತರ ಕಾಕಡಾರತಿ ಹೀಗೆ ಯೋಜನೆ ಮಾಡಲಾಗಿದೆ. ನಂತರ ಭಾವೂರಾವಮಹಾರಾಜರ ಶಿಷ್ಯನಾದ ಗಣಪತಿ ಪವಾರ ಎಂಬ ಹದಿನಾರು ವರ್ಷದ ಬಾಲಕನು ರಚಿಸಿದ "ಪಂಚಸಮಾಸೀ" ಎಂಬ ಪ್ರಕರಣವು ಇದೆ. ತದನಂತರ ಅವರ ಶಿಷ್ಯರು ರಚಿಸಿದ ನಾಲ್ಕೇ ಪದ್ಯಗಳನ್ನು ಸೇರಿಸಲಾಗಿದೆ. ಈ ಪುಸ್ತಕವು ಸಂಪ್ರದಾಯವನ್ನುಸರಿಸುವವರಿಗೇ ಮೆಚ್ಚುಗೆಯಾಗುವ ಹಾಗೆ ವಿಸ್ತೃತವಾದ ಗ್ರಂಥವೊಂದನ್ನು ಪ್ರಕಟಿಸುವ ವಿಚಾರವಿತ್ತು. ಆದರೆ ಕಾರಣಾಂತರದಿಂದ ಅದನ್ನು ಮುಂದೂಡುವ ಪ್ರಸಂಗ ಬಂದಿತು. ಅಂಥ ಪುಸ್ತಕವನ್ನು ಪ್ರಸಿದ್ಧಿಸುವ ಸುಯೋಗವು ಒದಗಿದರೆ ಅದರಲ್ಲಿ ಸಾಕಷ್ಟು ಉಪಯುಕ್ತ ಸಂಗತಿಗಳನ್ನು ಸೇರಿಸಬಹುದು. ಈ ಪುಸ್ತಕದ ಬೆಲೆಯನ್ನು ಆದಷ್ಟು ಕಡಿಮೆ ಇಡುವದು ಅವಶ್ಯವೆನಿಸಿದ್ದರಿಂದ ಭಜನೆಯಲ್ಲಿಯ ಆರತಿ-ಅಷ್ಟಕ-ಭಾರುಡಗಳನ್ನು ಕಡಿಮೆ ಮಾಡಲಾಗಿದೆ. ಅವುಗಳನ್ನೂ,

ಮಹಾರಾಜರ ಹತ್ತಿರವಿರುವ ಅಸಂಖ್ಯ ಅನುಭವಪದಗಳ ಹಾಗೂ ಅಭಂಗಗಳ ಸಂಗ್ರಹವನ್ನೂ, ಅವರ ಅನೇಕ ಮಹತ್ವಪೂರ್ಣ ಪತ್ರಗಳನ್ನೂ, ಸಾಂಪ್ರದಾಯಿಕ ಆಮೂಲಾಗ್ರ ಇತಿಹಾಸವನ್ನೂ ಮತ್ತು ಮಹಾರಾಜರ ವಿಸ್ತ್ರತಚರಿತ್ರೆಯನ್ನೂ ಮುಂಬರುವ ಗ್ರಂಥದಲ್ಲಿ ಅಳವಡಿಸಬೇಕಾಗುವದು. ಅವರ ಶಿಷ್ಯರು ಬರೆದ ಅನೇಕ ಪದಗಳನ್ನೂ ಆ ಗ್ರಂಥದಲ್ಲಿಯೇ ಸೇರಿಸಬೇಕಾಗಿದೆ. ಆ ಸುಯೋಗ ಬಂದಾಗ ಬರಲಿ. ಸದ್ಯಕ್ಕೆ ಪೂರ್ಣಚಂದ್ರನ ಆಹ್ಲಾದವನ್ನು ಚಂದ್ರಕಲೆಯಿಂದಲೇ ಪಡೆಯಬೇಕಾಗಿದೆ.

ಶ್ರೀ ಭಾವೂರಾವಮಹಾರಾಜರ ಪರಂಪರೆಯು ರೇವಣನಾಥರಿಂದ ಆರಂಭವಾಗಿದೆ. ಅವರಿಗೆ ರೇವಣಸಿದ್ಧರೆಂದೂ ಕರೆಯುತ್ತಾರೆ. ನವನಾಥರ ಹೆಸರುಗಳು ಕೆಳಗಿನ ಸಂಸ್ಕೃತ ಶ್ಲೋಕದಲ್ಲಿ ಬಂದಿವೆ. ಆ ಶ್ಲೋಕವು ಹೀಗಿದೆ:

"ಗೋರಕ್ಷಜಾಲಂಧರಚರ್ಪಟಾಶ್ಚ।
ಅಡ್‌ಭಂಗಕಾನೀಫಮಚ್ಛಿಂದರಾದ್ಯಾಃ॥
ಚೌರಂಗಿರೇವಾಣ ಚ ಭರ್ತ್ರುಸಂಜ್ಞಾ।
ಭೂಮ್ಯಾಂ ಬಭೂವುರ್ನವನಾಥಸಿದ್ಧಾಃ" ॥ ೪ ॥

ಭಾವಾರ್ಥ: ಗೋರಕ್ಷ, ಜಾಲಂಧರ, ಚರ್ಪಟ, ಅಡ್ಭಂಗ, ಕಾನೀಫ, ಮಚ್ಛೇಂದ್ರ, ಚೌರಂಗಿ, ರೇವಾಣ ಮತ್ತು ಭರ್ತ್ರುಸಂಜ್ಞಾ, ಈ ನವನಾಥ ಸಿದ್ಧರು ಭೂಮಿಯಮೇಲೆ ಆಗಿಹೋದರು.

## ಪ್ರಸ್ತಾವನೆ

ಸಂಸ್ಕೃತ ಬಲ್ಲವರಿಗೆ ಈ ಶ್ಲೋಕದಲ್ಲಿ ಕೆಲವು ದೋಷಗಳು ಕಂಡುಬರಬಹುದು. ಆದರೆ ನವನಾಥರ ಹೆಸರುಗಳನ್ನು ಹೇಳುವದೇ ಶ್ಲೋಕದ ಉದ್ದೇಶವಾಗಿದ್ದರಿಂದ, ಅದರಲ್ಲಿಯ ದೋಷಗಳನ್ನು ಕಾಣುವದು ಇಷ್ಟವಲ್ಲ. "ನವನಾಥ ಭಕ್ತಿಸಾರ" ಎಂಬ ಗ್ರಂಥದಲ್ಲಿ ರೇವಣಸಿದ್ಧರ ಚರಿತ್ರೆಯು ೩೪, ೩೫, ೩೬ನೆಯ ಅಧ್ಯಾಯಗಳಲ್ಲಿ ನಿರೂಪಿಸಲಾಗಿದೆ. ಅದರಲ್ಲಿ "ರೇವಣನಾಥ" ಈ ಹೆಸರು ಹೇಗೆ ಬಂದಿತೆಂಬುದನ್ನು ಹೀಗೆ ವಿವರಿಸಲಾಗಿದೆ:

"ಪೂರ್ವೀ ಅಠ್ಯಾ‍ಂಶಿ ಸಹಸ್ರ ಋಷೀ। ಝಾಲೇ ಆಹೇತ ವಿಧಿವೀರ್ಯಾಸೀ।
ತ್ಯಾಚ ಸಮಯೀ ರೇತ ಮಹೀಸೀ। ರೇವಾತೀರೀ ಪಡಿಯೇಲೆ ॥ ೧೭ ॥
ರೇವಾತೀರಿ ತೇಹೀ ರೇವೇತ। ರೇತ ಪಡಲೇ ಅಕಸ್ಮಾತ। ಚಮಸ ನಾರಾಯಣ
ಸಂಚಾರ ಕರೋನಿ ತ್ಯಾತ। ದೇಹಧಾರೀ ಮಿರವಲಾ ॥ ೧೮ ॥"

ಭಾವಾರ್ಥ: ಪೂರ್ವಕಾಲದಲ್ಲಿ ವಿಧಿಯ ವೀರ್ಯದಿಂದ ಎಂಬತ್ತೆಂಟು ಸಹಸ್ರ ಋಷಿಗಳು ಹುಟ್ಟಿದ್ದಾರೆ. ಆ ಸಮಯದಲ್ಲಿ ರೇವಾತೀರದಲ್ಲಿ (ನರ್ಮದಾ) ಭೂಮಿಯಮೇಲೆ ವೀರ್ಯವು ಬಿದ್ದಿತು. ರೇವಾತೀರದ ಉಸುಕಿನಲ್ಲಿ ಅಕಸ್ಮಾತ್ ಬಿದ್ದ ವೀರ್ಯದಲ್ಲಿ, ಚಮಸ ನಾರಾಯಣನು ಪ್ರವೇಶಿಸಿ ದೇಹಧಾರಿಯಾಗಿ ಮೆರೆದನು.

ರೇವಣನಾಥರು ಕೃಷಿವ್ಯವಸಾಯ ಮಾಡುತ್ತಿರುವಾಗ ಅವರಿಗೆ ಶ್ರೀ ದತ್ತಾತ್ರೇಯರ ಭೆಟ್ಟಿ ಹೇಗಾಯಿತು? ದತ್ತಾತ್ರೇಯರು ಅವರಿಗೆ ಪೂರ್ಣ

ಅನುಗ್ರಹ ಮಾಡದೆ ಕೇವಲ ಮಹಿಮಾಸಿದ್ಧಿಯನ್ನು ಹೇಗೆ ಕರುಣಿಸಿದರು? ಆ ಸಿದ್ಧಿಯ ಬಲದಿಂದ ರೇವಣನಾಥರು ಚಮತ್ಕಾರಗಳನ್ನು ಹೇಗೆ ಮಾಡಿದರು? ಮುಂದೆ ಮತ್ಸ್ಯೇಂದ್ರನಾಥರ ಆಗಮನವಾಗಿ ಅವರು ಅಷ್ಟಸಿದ್ಧಿಗಳನ್ನು ವಶಪಡಿಸಿಕೊಂಡಿದ್ದರಿಂದ ರೇವಣನಾಥರ ಮಾನಹಾನಿಯು ಹೇಗಾಯಿತು? ಆಮೇಲೆ ದತ್ತಾತ್ರೇಯರ ಪೂರ್ಣಾನುಗ್ರಹವನ್ನು ಸಂಪಾದಿಸಲು ಅವರು ಹೇಗೆ ಯತ್ನಿಸಿದರು? ಮತ್ಸ್ಯೇಂದ್ರನಾಥರು ಗಿರಿನಾರ ಪರ್ವತಕ್ಕೆ ಹೋಗಿ ಶ್ರೀ ದತ್ತಾತ್ರೇಯರನ್ನು ಹೇಗೆ ಕರೆತಂದರು, ನಂತರ ದತ್ತಾತ್ರೇಯರು, ರೇವಣನಾಥರನ್ನು ಆತ್ಮಜ್ಞಾನ ಪಾರಂಗತರನ್ನಾಗಿಮಾಡಿ ಎಲ್ಲ ವಿದ್ಯೆಗಳನ್ನೂ ಎಲ್ಲ ಕಲೆಗಳನ್ನೂ ಹೇಗೆ ಅನುಗ್ರಹಿಸಿದರೆಂಬುದರ ಸ್ವಾರಸ್ಯಪೂರ್ಣ ವರ್ಣನೆಯು "ನವಭಕ್ತಿಸಾರ" ಗ್ರಂಥದ ೩೬ನೆಯ ಅಧ್ಯಾಯದಲ್ಲಿದೆ. ಜಿಜ್ಞಾಸುಗಳು ಅದನ್ನು ಓದಿಕೊಳ್ಳಬೇಕು.

ರೇವಣನಾಥಚರಿತ್ರೆಯ ಮುಂದಿನ ಉಪಯುಕ್ತಭಾಗವು "ಸಿದ್ಧಾಂತಸಾರ"ವೆಂಬ ಗ್ರಂಥದಲ್ಲಿ ದೊರೆಯುತ್ತದೆ. ರೇವಣನಾಥರಿಂದ ಮರುಳಸಿದ್ಧರೆಂಬವರು ಅನುಗ್ರಹೀತರಾದರು. ಕರವೀರಕ್ಷೇತ್ರದಲ್ಲಿ ಸಿದ್ಧಪುರುಷರ ವಿರೋಧವನ್ನು ಮಾಡುತ್ತಿದ್ದ "ಮಾಯಿ" ಎಂಬ ಸ್ತ್ರೀಯು ಪಣಕಟ್ಟಿ ಎಷ್ಟೋ ಸಿದ್ಧಪುರುಷರನ್ನು ಜಯಿಸಿ, ಅವರನ್ನು ಬಂದಿಯಲ್ಲಿ ಇಟ್ಟಿದ್ದಳು. ಮರುಳಸಿದ್ಧರು ಆಕಸ್ಮಾತ್ತಾಗಿ ಅಲ್ಲಿಗೆ ಬಂದು ಅವಳ ಪಣವನ್ನು ಗೆದ್ದರು. ಆದರೆ ಅವಳ ಭ್ರಾಂತಿಯನ್ನು ಪೂರ್ಣವಾಗಿ ತೊಡೆದು ಹಾಕಲಿಕ್ಕೆ

ಗುರುಗಳ ಆಜ್ಞೆ ಇರಲಿಲ್ಲವಾದ್ದರಿಂದ ಅವರು ತಮ್ಮ ಗುರುಗಳನ್ನು ಕರವೀರಕ್ಕೆ ಬರುವಂತೆ ಪ್ರಾರ್ಥಿಸಿದರು. ಅದಕ್ಕೆ ಒಪ್ಪಿ, ರೇವಣನಾಥರು ಬರುವಾಗ, ದಾರಿಯಲ್ಲಿ ರೇವಣಗಿರಿ ಪರ್ವತದ ಮೇಲೆ ವಿಶ್ರಾಂತಿ ಪಡೆದರು. ಅವರು ಕರವೀರಕ್ಕೆ ಬಂದು ಮಾಯಿಯು ಕೊಟ್ಟ ವಿಷವನ್ನು ಪ್ರಾಶನಮಾಡಿ ಅವಳ ಶಕ್ತಿಯನ್ನೆಲ್ಲ ನಿರ್ಮೂಲ ಮಾಡಿದರು. ಆಗ ಅವಳು ಅವರಿಗೆ ಶರಣುಬಂದಳು. ಅವರು ಅವಳನ್ನು ಒಂದು ಕಿನ್ನರಿಯನ್ನಾಗಿ ಮಾರ್ಪಡಿಸಿ, ಅದನ್ನು ಯಾವಾಗಲೂ ಬಾರಿಸುತ್ತಿದ್ದರೆಂದು ಹೇಳುತ್ತಾರೆ.

ಈ ರೀತಿಯಾಗಿ ಆ ಮಾಯಿಯ ಮರ್ದನಮಾಡಿದ್ದರಿಂದ ಆ ಪ್ರದೇಶದಲ್ಲಿ ಅವರು ಕಾಡಸಿದ್ಧರೆಂಬ ಹೆಸರಿನಿಂದ ಪ್ರಸಿದ್ಧರಾದರು. ಮಾಯಿಯನ್ನು ಕಾಡಿದ್ದರಿಂದ ಅವರಿಗೆ ಕಾಡಸಿದ್ಧ ಎಂಬ ಹೆಸರು ಬಂದಿತೆಂದು "ಸನ್ಮಾರ್ಗವೈಭವ"ದಲ್ಲಿ ಹೇಳಲಾಗಿದೆ. ಕಾಡಿನಲ್ಲಿದ್ದು ಸಿದ್ಧಿಯನ್ನು ತಲುಪಿದ್ದಕ್ಕಾಗಿ ಕಾಡಸಿದ್ಧ ಎಂಬ ಹೆಸರು ಬಂದಿದೆ ಎಂದೂ ಕೆಲವರು ಹೇಳುತ್ತಾರೆ. ರೇವಣಸಿದ್ಧ ಹಾಗೂ ಕಾಡಸಿದ್ಧರ ಉಲ್ಲೇಖವು ಸ್ಕಂದಪುರಾಣದಲ್ಲಿಯ "ಶಿವಪಾರ್ವತಿ" ಸಂವಾದದಲ್ಲಿ ಬರುತ್ತದೆ ಎಂಬುದು "ಸನ್ಮಾರ್ಗವೈಭವ" ಕರ್ತರ ಅಭಿಪ್ರಾಯ. ಲೇಖಕರು ಆ ಗ್ರಂಥದ ಅವಲೋಕನ ಮಾಡಿಲ್ಲವಾದ್ದರಿಂದ ಆಬಗ್ಗೆ ನಿರ್ಧಾರವಾಗಿ ಹೇಳಲು ಬರುವಂತಿಲ್ಲ. ರೇವಣಸಿದ್ಧರಿಂದ ಮರುಳಸಿದ್ಧರೂ ಮತ್ತು ಮರುಳಸಿದ್ಧರಿಂದ ಕಾಡಸಿದ್ಧರಾದರೆಂದು ಆ ಗ್ರಂಥದಲ್ಲಿದೆ ಎನ್ನುತ್ತಾರೆ. ಏನೇ ಇರಲಿ,